133

# ಅಕ್ಷಯ ಪಾತ್ರೆ

(ಚಿಕ್ಕ ಮಕ್ಕಳ ನಾಟಕ)

•

ರಚಿಸಿದವರು:

ಶ್ರೀ| ಟಿ. ಚಂದ್ರರಾಜ ಸೆಟ್ಟಿ,

ಸಿದ್ಧಕಟ್ಟೆ.

1957.

ಒಂದಾಣೆ 

ಮಾಲೆ

# ಅಕ್ಷಯ ಪಾತ್ರೆ

## ಚಿಕ್ಕ ಮಕ್ಕಳ ನಾಟಕ

.........

### ಪ್ರಾರ್ಥನೆ

ಕರುಣಾಕರನೆ ಪೊರೆಯೊ । ದಯಾನಿಧಿ ॥
ನಮ್ಮ ಶಾಲೆಯಾ ಬಾಲಕರೆಲ್ಲರು ।
ಅನುದಿನ ಕಲಿಯುತ ವಿದ್ಯೆಯ ಪಡೆವಂತೆ ॥ ೧ ॥

ನಮ್ಮ ನಾಡಿನಾ ಮನುಜರು ಎಲ್ಲರು ।
ಸುಖದಲಿ ನಲಿಯುತ । ಕೀರ್ತಿಯ ಪಡೆವಂತೆ ॥ ೨ ॥

(ಕಟ್ಟಿಗೆಯ ಹೊರೆಯನ್ನು ಹೊತ್ತುಕೊಂಡು ಗುರುವನ ಪ್ರವೇಶ.)

ಗುರುವ: ಕಟ್ಟಿಗೆ ಬೇಕೇ ಕಟ್ಟಿಗೆ? (ಹೊರೆಯನ್ನು ಕೆಳಗೆ ಹೊತ್ತು ಹಾಕಿ) ಅಯ್ಯಬ್ಬಾ! ದಿನಕ್ಕೊಂದು ಹೊರೆ ಕಟ್ಟಿಗೆ ಮಾರಿದರೆ ನನ್ನ ಜೀವನ ನಡೆದೀತೇ? ಬೆಳಗ್ಗಯಿಂದ ಸಾಯಂಕಾಲದ ವರೆಗೆ ದುಡಿದರೆ ನನಗೆ ಸಿಗುವುದು ಒಂದು ರೂಪಾಯಿ. ನಾಳೆ ಹಬ್ಬ! ಒಂದು ರೂಪಾಯಿಯಲ್ಲಿ ಔತಣದ ಅಡಿಗೆ—ನನಗೆ—ನನ್ನ ಮಕ್ಕಳಿಗೆ—ನನ್ನ ಯಜಮಾನಿಗೆ ಒಂದೊಂದು ಹೊಸ ಬಟ್ಟೆ ತರಲು ಸಾಧ್ಯವೇ? ಆದಷ್ಟು ಬೇಗನೆ ಈ ಕಟ್ಟಿಗೆಯನ್ನು ಮಾರಿ ಪುನಃ ಕಾಡಿಗೆ ಹೋಗಿ ಇನ್ನೊಂದು ಹೊರೆ ಕಟ್ಟಿಗೆ ತಂದು ಮಾರುವೆನು. ಹಬ್ಬದೂಟ ಗಮ್ಮತು ಮಾಡಬೇಕು. (ಕಟ್ಟಿಗೆ ಹೊರೆಯನ್ನು ಎತ್ತಿಕೊಂಡು) ಕಟ್ಟಿಗೆ! ಕಟ್ಟಿಗೆ! ಯಾರಿಗ ಬೇಕು ಕಟ್ಟಿಗೆ? ರೂಪಾಯಿಗೊಂದು ಹೊರೆ ಕಟ್ಟಿಗೆ (ನಿಷ್ಕ್ರಮಣ).

(ತೆರೆ ಏಳುವುದು. ಗುರುವನ ಮನೆ. ಮಕ್ಕಳು ಓದುತ್ತಿರುವರು. ರುಕ್ಕುವಿನ ಪ್ರವೇಶ.)

ರುಕ್ಮ: ಯಾಕೆ ಗದ್ದಲಮಾಡುತ್ತೀರಿ? ಮೆಲ್ಲಗೆ ಓದಿ. ಗದ್ದಲ ಮಾಡ್ಬೇಡಿ.

ಮಗು: ಅಮ್ಮಾ! ನಾಳೆ ದೀಪಾವಳಿಯಲ್ಲವೇ? ಕಡ್ಲೆಯ ಪಾಯಸ ಮಾಡಬೇಕಮ್ಮಾ. ನಾಳೆ ನಾರಾಯಣರಾಯರ ಮನೆಯಲ್ಲಿ ಕಡ್ಲೆಯ ಪಾಯಸವಂತೆ.

ಇನ್ನೊಂದು ಮಗು: ಅಮ್ಮಾ, ನನಗೆ ದೋಸೆ ಬೇಕು.

ರುಕ್ಮ: ಎಲ್ಲ ಮಾಡುವ. ಸಾಕು! ಸುಮ್ಮನಿರಿ. ನಿಮ್ಮ ಅಪ್ಪನು ಬರಲಿ. ನೀವು ಗದ್ದಲಮಾಡದೆ ಎಲ್ಲರೂ ಕೂತು ಓದಬೇಕು. ಒಳ್ಳೆಯ ಮಕ್ಕಳು ಚಿಕ್ಕವರಿರುವಾಗಲೇ ಓದಿ ಚೊಕ್ಕ ಬುದ್ಧಿಯನ್ನು ಕಲಿತು ಬುದ್ಧಿವಂತರಾಗಬೇಕು. (ಸ್ವಗತ) ಮಕ್ಕಳಿಗೆ ಮನೆಯ ತಾಪತ್ರಯವೇನು ತಿಳಿಯುತ್ತದೆ? ಮನೆಯಲ್ಲಿ ದೀಪಕ್ಕೆ ಎಣ್ಣೆಯಿಲ್ಲ. ಅಡಿಗೆಗೆ ಅಕ್ಕಿಯಿಲ್ಲ. ನಮ್ಮವರ ಕೈಯಲ್ಲಿ ಕಾಸಿಲ್ಲವಂತೆ. ಅದರ ಮೇಲೆ ಹಬ್ಬವೊಂದು ಆಗಾಗ ಬಂದು ಬಡವರನ್ನು ಕಾಡುತ್ತಿದೆ. ಊರೆಲ್ಲ ಬೆಳಕಾದರೂ ನಮ್ಮ ಮನೆ ಮಾತ್ರ ಕತ್ತಲೆ. ಕಷ್ಟ! ಬಡತನವೆಂಬುದು ಕಷ್ಟ! ನನ್ನ ಯಜಮಾನರು ಕಟ್ಟಿಗೆತರಲು ಹೋದವರು ಇನ್ನೂ ಬಂದಿಲ್ಲ. ಎಷ್ಟು ಹೊತ್ತಿಗೆ ಬರುತ್ತಾರೋ ಏನೊ!

(ರಸ್ತೆ ಫರದೆ ಬೀಳುವುದು. ಗುರುವನ ಪ್ರವೇಶ.)

ಗುರುವ: ಎಲ್ಲಿ ಹುಡುಕಿದರೂ ಒಣ ಮರಗಳೇ ಕಾಣುವುದಿಲ್ಲವಲ್ಲ! ಏನು ಮಾಡಲಿ? ಕಾಡಿಡೀ ಸುತ್ತಿದರೂ ಸತ್ತ ಮರ ಒಂದೂ ಇಲ್ಲವೆಂದರೆ, ಅದೂ ಒಂದು ದುರಾದೃಷ್ಟವೆನ್ನಲೇ? ಮನೆಗೆ ಹೋದೊಡನೆ ಮಕ್ಕಳು ಜೀವ ತಿನ್ನುತ್ತಿವೆ; ಮನೆಯೊಳಗೆ ಅಕ್ಕಿಯಿಲ್ಲ— ಉಪ್ಪಿಲ್ಲ— ಮೆಣಸಿಲ್ಲ!— ಇಲ್ಲ — ಇಲ್ಲ — ಒಂದೂ ಇಲ್ಲ. ಎಷ್ಟು ಕಷ್ಟಪಟ್ಟರೂ ಈ ಹಾಳು ಹೊಟ್ಟೆ ತುಂಬದು. ಕಷ್ಟ! ಕಷ್ಟ! ಬಡತನವೆಂಬುದು ಬಹು ಕಷ್ಟ!

ಪದ್ಯ — ಸಾಕಪ್ಪ ಸಾಕು! ಬಡತನ ಗೋಳು ।
ಯಾರಿಗೆ ಬೇಕಪ್ಪ ಈ ಹಾಳು ಬಾಳು ॥ ಪ ॥
ಹೊಟ್ಟೆಯ ಹಿಟ್ಟಿಗೆ ಗತಿಕಾಣೆನಲ್ಲ ।
ಬಟ್ಟೆಯ ಹೊಲಿಸಲು ಚಿಕ್ಕಾಸು ಇಲ್ಲ ॥ ೧ ॥

ಮನೆಯಲ್ಲಿ ಮಕ್ಕಳು ಕಾಡುವುವಲ್ಲ ।
ಬದುಕುವ ರೀತಿಯು ದೇವನೆ ಬಲ್ಲ ॥ ೨ ॥

(ಪರದೆಯು ಏಳುವುದು. ಕಾಡಿನ ದೃಶ್ಯ.)

ಕಟ್ಟಿಗೆಗಾಗಿ ಕಾಡಿಡೀ ಸುತ್ತಿ ಸುತ್ತಿ ಕತ್ತಲಾಗುತ್ತ ಬಂತು. ಸೂರ್ಯನು ಪಡುಕಡೆಯಲ್ಲಿ ಅಸ್ತಮಿಸಿದನು. ನಾನು ಕಟ್ಟಿಗೆಗಾಗಿ ಕಾಡಿನಲ್ಲಿ ತಿರು-ತಿರುಗಿ ದಾರಿ ತಪ್ಪಿದ್ದೇನೆ. ಈ ಕತ್ತಲಲ್ಲಿ ಇನ್ನು ಹೇಗೆ ಮನೆಯನ್ನು ಸೇರಲಿ? ಆದದ್ದಾಗಲಿ! ಈ ರಾತ್ರಿಯನ್ನು ಈ ಕಾಡಿನಲ್ಲಿಯೇ ಕಳೆದು ಬೆಳಗಾದ ಮೇಲೆ ಪುನಃ ದಾರಿಯನ್ನು ಹುಡುಕುವೆನ. ಮನೆಗೆ ಹೋಗುವಾಗ ಬರೀ ಕೈಯಿಂದ ಹೋದರೆ, ನಿನ್ನೆಯಿಡೀ ಉಪವಾಸವಿದ್ದ ಮಕ್ಕಳು ನನ್ನನ್ನೇ ತಿಂದುಬಿಟ್ಟಾರು. ಇಲ್ಲಿಯೇ ಒಂದು ಕಡೆ ವಿಶ್ರಮಿಸುವೆನು.

(ಗುರುವನು ಒಂದು ಕಡೆ ಮಲಗುವನು. ನಗಾಡುತ್ತಾ ದೇವತಾ ಸ್ತ್ರೀಯರು ಪ್ರವೇಶಿಸುವರು. ಒಬ್ಬಳನ್ನು ಮುಖ್ಯ ದೇವಿಯಾಗಿ ನಡುವೆ ನಿಲ್ಲಿಸಿ ಶಾಲಾ ಹೆಮ್ಮಕ್ಕಳ ಕೋಲಾಟ, ಕುಮ್ಮಿ ಮೊದಲಾದುವನ್ನಿಲ್ಲಿ ಪ್ರದರ್ಶಿಸಬಹುದು.)

("ಶೃಂಗಾರ ಸುಧಾಕರ ಸುಂದರಾಕಾರ"—ಎಂಬಂತೆ.)

ಬನ್ನಿರೆಲ್ಲ ಕೂಡಿಕೊಂಡು ಕೋಲನಾಡುವ ।
ಚಂದದಿಂದ ಒಟ್ಟುಗೂಡಿ ಕೋಲನಾಡುವ । ನಾವ್ ॥ ಪ ॥
ದೇವರ ದೇವನ ; ಪಾವನ ನಾಮನ ।
ಭಾವ ಭಕುತಿಯಿಂದ ನಾವು । ಹಾಡಿ ಪಾಡುವ । ನಾವ್ ॥ ೧ ॥
ಗುರುಗಳನ್ನು ನಮಿಸುತ । ಹಿರಿಯರನ್ನು ನೆನಸುತ ।
ಕಿರಿಯರಾದ ನಮಗೆ ಸುಖವು । ದೊರೆಯುವಂತೆ ಬೇಡುವಾ ॥ ೨ ॥

(ಗುರುವನು ಕೋಲಾಟದ ಶಬ್ದಕ್ಕೆ ಎದ್ದು ಕೂತುಕೊಳ್ಳುವನು—ನಿಲ್ಲುವನು.)

ದೇವತೆ: (ದೇವಿಯನ್ನು ಕುರಿತು) ಅಮ್ಮಾ! ನೋಡಲ್ಲಿ. ಮಾನವ ಪ್ರಾಣಿಯೊಂದು ಕದ್ದು ನಮ್ಮನ್ನು ನೋಡುತ್ತಿದೆ.

ದೇವಿ: ಅವನನ್ನಿಲ್ಲಿ ಕರೆದುಕೊಂಡು ಬಾ.

(ದೇವತೆಯು ಗುರುವನನ್ನು ಎಳೆದು ತರುವಳು. ಅವನು ಕೂಗುವನು.)

ದೇವಿ: ಅಳಬೇಡ. ನೀನು ಯಾರು?

ಗುರುವ: ನಾ–ನಾ–ನಾನು ಕಟ್ಟಿಗೆಯೊಡೆದು ಜೀವಿಸುವ ಬಡವ. ಅಯ್ಯೋ, ನಾನು ಬಡವ. ನನ್ನನ್ನು ಬಿಟ್ಟುಬಿಡಿ. (ಅಳುವನು.)

ದೇವಿ: ಅಳಬೇಡ. ಯಾಕೆ ಅಳುತ್ತೀ?

ಗುರುವ: ಅಮ್ಮಾ! ನಾನು ಬಡವ. ಮನೆಯಲ್ಲಿ ಮಕ್ಕಳು ಮರಿಗಳು ಹೊಟ್ಟೆಗೆ ಹಿಟ್ಟಿಲ್ಲದೆ ಉಪವಾಸ ಸಾಯುತ್ತಿವೆ. ನಾನೆಷ್ಟು ದುಡಿದರೂ ಈ ಹಾಳು ಹೊಟ್ಟೆಯೇ ತುಂಬುವುದಿಲ್ಲ. ನಾನು–ನಾನು ಕಟ್ಟಿಗೆಯೊಡೆದು ಜೀವಿಸುವವನು. ಏನು ಹೇಳಲಿ! ಮಕ್ಕಳ ಗೋಳನ್ನು ತಡೆಯಲಾರದೆ, ಪ್ರಾಣವನ್ನಾದರೂ ಕಳಕೊಂಡು ಸಾಯಬೇಕೆಂದು ಇಲ್ಲಿಗೆ ಬಂದೆ.

ದೇವತೆಯೊಬ್ಬಳು: ಪಾಪ! ಬಡವ. ಮನೆಯಲ್ಲಿ ಮಕ್ಕಳು ಬೇರೆ ಇವೆಯಂತೆ. ಪಾಪ! ಪಾಪ!! (ಗುರುವ ಅಳುವನು.)

ದೇವಿ: ಅಳಬೇಡ (ದೇವತೆಯೊಬ್ಬಳನ್ನು ಕುರಿತು) ಇವನು ಕಡು ಬಡವ. ನಾವು ಇವನಿಗೆ ಸಹಾಯ ಮಾಡಬೇಕಾದುದು ನಮ್ಮ ಧರ್ಮ.

ಗುರುವ: ಅಮ್ಮಾ! ನಿನ್ನೆಯಿಂದ ನಾನು ಊಟವನ್ನೇ ಮಾಡಿಲ್ಲ. ಮನೆಯಲ್ಲಿ ಹೆಂಡತಿ ಮಕ್ಕಳು ಉಪವಾಸವಾಗಿದ್ದಾರೆ.

ದೇವಿ: ಹೆದರಬೇಡ. ನಿನಗಾಗಲೀ, ನಿನ್ನ ಕುಟುಂಬಕ್ಕಾಗಲೀ ಇನ್ನು ಮುಂದೆ ಹಸಿವೆಯು ಬಾಧಿಸದಂತೆ ನಿನಗೊಂದು ಪಾತ್ರೆಯನ್ನು ಕೊಡುವೆನು. (ದೇವತೆಯೊಂದನ್ನು ಕುರಿತು) ಆ ಅಕ್ಷಯ ಪಾತ್ರೆಯನ್ನಿಲ್ಲಿ ತಾ. (ದೇವತೆಯು ಪಾತ್ರೆಯನ್ನು ತಂದುಕೊಡುವಳು,—ದೇವಿಯು ಗುರುವನನ್ನು ಕುರಿತು) ಇಲ್ಲಿ ಬಾ. ನೋಡು! ಇದು ಅಕ್ಷಯ ಪಾತ್ರೆ. ನೀನು ಈ ಪಾತ್ರೆಯನ್ನು ನೆಲದ ಮೇಲಿಟ್ಟು ಎದುರಿಗೆ ಕೈಜೋಡಿಸಿ, ನಿನಗೆ ಬೇಕಾದ ತಿಂಡಿಯನ್ನು ಬೇಡಿದರೆ ಇದು ಕೊಡುತ್ತದೆ. ಇದರಿಂದಾಗಿ ಇನ್ನು ಮುಂದೆ ನಿನ್ನನ್ನು ಹಸಿವೆಯು ಕಾಡಲಾರದು. ನೀನು ಮುಂದಕ್ಕೆ ನೀತಿವಂತನಾಗಿ ಬಾಳು. ಅನ್ಯಾಯಕ್ಕೆ ಹೋಗಬೇಡ, ನೀತಿ ತಪ್ಪಬೇಡ. ಈ ಅಕ್ಷಯ ಪಾತ್ರೆಯನ್ನು ಕೊಟ್ಟವಳಾನೆಂದು ಇತರರೊಡನೆ ತಿಳಿಸಬೇಡ.

ಗುರುವ: (ಪಾತ್ರೆಯನ್ನು ತೆಗೆದುಕೊಂಡು) ಅಮ್ಮಾ, ಧನ್ಯವಾದ! (ಅಕ್ಷಯ ಪಾತ್ರೆಯನ್ನು ನೆಲದ ಮೇಲಿಟ್ಟು ದೇವಿಗೆ ಅಡ್ಡಬೀಳುವಾಗ, ಎರಡನೆ ಘರದೆ ಬೀಳುವುದು.)

ಗುರುವ: (ಎದ್ದು) ನಾನೆಲ್ಲಿದ್ದೇನೆ? ನನಗೆ ಅಕ್ಷಯ ಪಾತ್ರೆಯನ್ನಿತ್ತ ದೇವತೆಗಳೆಲ್ಲಿ? (ಸುತ್ತಲೂ ನೋಡಿ) ಓಹೋ! ನಾನೀಗ ಕಾಡಿನಲ್ಲಿಲ್ಲ. ನಾಡಿನಲ್ಲಿದ್ದೇನೆ. ಮನೆಯಲ್ಲಿ ಮಡದಿ ಮಕ್ಕಳು ಎಷ್ಟು ಹಸಿದಿರುವರೋ ಏನೋ. ನಾನು ಹೋಗಬೇಕು. (ಬದಿಗೆ ಹೋಗಿ, ಪುನಃ ರಂಗಮಧ್ಯಕ್ಕೆ ಬಂದು) ಇದು ಅಕ್ಷಯ ಪಾತ್ರೆಯತೆ. ಇದನ್ನು ದೇವತೆಗಳು ಕೊಟ್ಟರೆಂದ ಮೇಲೆ ಇದು ಸಾಮಾನ್ಯ ಪಾತ್ರೆಯಾಗಿರಲಾರದು. ನನಗೆ ಬೇಕಾದುದೆಲ್ಲ ವನ್ನು ನೀಡಬಲ್ಲ ಕಾಮಧೇನುವಿದ! ಕಲ್ಪವೃಕ್ಷವಿದು!! ಆದರೆ, (ಆಲೋಚಿಸಿ) ಇದರ ಸತ್ಯತೆಯನ್ನು ಪರೀಕ್ಷಿಸಬೇಕು. (ಪಾತ್ರೆಯನ್ನು ನೆಲದ ಮೇಲಿಟ್ಟು) ಏನನ್ನು ಬೇಡಲಿ? ಬಿಸಿಬಿಸಿ ದೋಸೆಯನ್ನು ಬೇಡುವೆನು. ಓಹೋ! ದೋಸೆಯನ್ನು ತಿಂದರೆ ಕೈತೊಳೆಯಲು ನೀರಿಲ್ಲವಲ್ಲ! ಲಾಡು–ಚಿರೋಟಿ–ಹೋಳಿಗೆ–ಯಾವುದೂ ಬೇಡ. ಸದ್ಯ ಹುರಿಯಕ್ಕಿಯನ್ನು ತಿಂದು ಹೊಟ್ಟೆತುಂಬಿಸಿಕೊಳ್ಳೋಣ. (ಪಾತ್ರೆಯ ಎದುರಿಗೆ ಮಂಡಿಯೂರಿ ಕೈಮುಗಿದು) ಅಕ್ಷಯ ಪಾತ್ರೆಯೇ, ನನಗೆ ಹುರಿಯಕ್ಕಿಯನ್ನು ಕರುಣಿಸು! (ಪಾತ್ರೆಯೊಳಗೆ ಬಗ್ಗಿ ನೋಡಿ ಸಂತೋಷದಿಂದ ಕುಣಿಯುವನು) ಹುರಿಯಕ್ಕಿ! ಹುರಿಯಕ್ಕಿ!! (ಎತ್ತಿಕೊಳ್ಳುವನು—ತಿನ್ನುವನು.) ಎಷ್ಟು ರುಚಿಯಾಗಿದೆ! ಇಂಥ ಹುರಿಯಕ್ಕಿಯನ್ನು ನಾನು ನನ್ನ ಜನ್ಮದಲ್ಲೇ ತಿಂದಿಲ್ಲ.

ಪದ್ಯ— ಬನ್ನಿರೀ! ಬನ್ನಿರೀ! ಬನ್ನಿರೆಲ್ಲರು ।
ತಿನ್ನಿರೀ! ತಿನ್ನಿರೀ! ಹುರಿಯಕ್ಕಿಯಾ ॥ ಪಲ್ಲ ॥

ಬಿಳಿ ಬಿಳಿ ಹುರಿಯಕ್ಕಿ! ಕುರುಕುರು ಹುರಿಯಕ್ಕಿ ।
ಹುರಿಯಕ್ಕಿ! ಹುರಿಯಕ್ಕಿ! ಹುರಿಯಕ್ಕಿಯಾ ॥ ೧ ॥

ಈ ಹುರಿಯಕ್ಕಿಯ ರುಚಿಯನ್ನು ನನ್ನ ಮಕ್ಕಳು ಅರಿಯಬೇಕು. ನಾನೊಬ್ಬನೇ ತಿನ್ನಲೇಕೆ? ಮನೆಯಲ್ಲಿ ಮಕ್ಕಳು ಹಸಿದಿರಬಹುದು. ನಾನೀಗಲೇ ಹೋಗಿ ಹೊಟ್ಟೆತುಂಬಾ ಹುರಿಯಕ್ಕಿಯನ್ನು ಕೊಡುವೆನು. (ಹೋಗುವನು. ತೆರೆ ಏಳುವುದು. ಮನೆಯಲ್ಲಿ ಮಗುವಿನೊಡನೆ ರುಕ್ಕು ಮಾತಾಡುತ್ತಿರುವಳು.)

ಮಗು: ಅಮ್ಮಾ! ಅಪ್ಪನೇಕೆ ಬರಲಿಲ್ಲ? ನಾನು ಹಸಿವೆಯನ್ನು ತಾಳಲಾರೆ. ಗಂಜಿ ಬಡಿಸಮ್ಮಾ.

ರುಕ್ಮ: ಮಗೂ! ನೀನು ಹಾಗೆ ಹಟಮಾಡಬಾರದು. ಮನೆಯಲ್ಲಿ ಗಂಜಿ ಬೇಯಿಸಲು ಅಕ್ಕಿ ಇಲ್ಲ. ನಿನ್ನ ಅಪ್ಪನು ಈಗ ಅಕ್ಕಿ ತರುತ್ತಾನೆ. ಆ ಮೇಲೆ ಹೊಟ್ಟೆ ತುಂಬಾ ಊಟಮಾಡಬಹುದು.

ಗುರುವ: (ಪ್ರವೇಶಿಸಿ) ರುಕ್ಮ! ರುಕ್ಮಾ!!

ರುಕ್ಮ: ಓ! ಬಂದಿರಾ?

ಗುರುವ: (ರುಕ್ಮನನ್ನು ನೋಡದವನಂತೆ) ರುಕ್ಮಾ! ಎಲ್ಲಿದ್ದೀಯೋ?

ರುಕ್ಮ: ಅಯ್ಯೋ! ಇವರ ಅವತಾರವೇ! ಈ ದಿನ ತುಂಬ ಕುಡಿದು ಬಂದಂತಿದೆ.

ಗುರುವ: (ರುಕ್ಮನನ್ನು ನೋಡಿ) ಕುಡಿಯಲಿಲ್ಲವೇ ನಾನು! ಸಂತೋಷ— ಸಂತೋಷದ ಭರದಲ್ಲ ನೀನು ನನಗೆ ಕಾಣಿಸಲೇ ಇಲ್ಲ

ರುಕ್ಮ: ಏನು ತಂದಿದ್ದೀರಿ?

ಮಗು: (ಗುರುವನ ಬಳಿ ಬಂದು) ಅಪ್ಪಾ! ಹೊಟ್ಟೆ ಹಸಿವೆ! ನನಗೆ ಗಂಜಿಕೊಡು. ಅಪ್ಪಾ! ಗಂಜಿ ಉಂಟಾ?

ಗುರುವ: ಹೌದು ಮಗೂ! ಅಕ್ಕಿಯ ಬದಲಿಗೆ ಗಂಜಿಯನ್ನೇ ತಂದಿದ್ದೇನೆ. ಗಂಜಿ ಮಾತ್ರವಲ್ಲ, ಲಾಡು–ಪಾಯಸ–ಹೋಳಿಗೆ–ಕಡುಬು–

ಮಗು: ಅಪ್ಪಾ! ನನಗೆ ಬೇಕು.

ಬೇರೊಂದು ಮಗು: ಅಪ್ಪಾ! ನನಗೆ ಹೋಳಿಗೆ ಬೇಕು.

ಗುರುವ: ನೀವು ಯಾವುದನ್ನು ಕೇಳುತ್ತೀರೋ ಅದನ್ನೆಲ್ಲಾ ಕೊಡುತ್ತೇನೆ. (ಮಕ್ಕಳನ್ನು ಸಾಲಾಗಿ ಕುಳ್ಳಿರಿಸಿ ರುಕ್ಮನಿನೊಡನೆ) ರುಕ್ಮ, ಇದು ಅಕ್ಷಯಪಾತ್ರೆ.

ಮಗು: ಅಪ್ಪಾ! ಲಾಡು.

ಬೇರೊಂದು ಮಗು: ನನಗೆ ಹೋಳಿಗೆ.

ಗುರುವ: ಸುಮ್ಮನೆ ಕುಳಿತುಕೊಳ್ಳಿ. (ರುಕ್ಮನಿನೊಡನೆ) ಈ ಪಾತ್ರೆಯಿಂದ ನಮಗಿನ್ನು ಹಸಿವೆಯ ಭಯವಿಲ್ಲ. ಇದರ ಎದುರಿಗೆ ಕೈ ಜೋಡಿಸಿ ಬೇಡಿಕೊಂಡರೆ ಯಾವ ತಿಂಡಿ ಬೇಕಾದರೂ ಸಿಕ್ಕುತ್ತದೆ.

ರುಕ್ಮ: ಹೌದೇ?

ಗುರುವ: ನಾನು ಸುಳ್ಳಾಡುತ್ತೇನೆಯೇ? ನೀನೇ ನೋಡುವಿಯಂತೆ. ದಾರಿಯಲ್ಲಿ ಬರುವಾಗ ನನಗೆ ಹೊಟ್ಟೆಕಸಿವೆಯಾಯಿತೆಂದು ಹುರಿಯಕ್ಕಿಯನ್ನು ತರಿಸಿದೆ. ಇಗೋ ನೋಡು (ಹುರಿಯಕ್ಕಿಯನ್ನು ತೋರಿಸುವನು).

ಮಗು: (ಕೂತಲ್ಲಿಂದ ಎದ್ದು) ಅಪ್ಪಾ! ನನಗೆ ಗಂಜಿ ಬೇಡ. ಹುರಿಯಕ್ಕಿ ಕೊಡು.

ಬೇರೊಂದು ಮಗು: ಅಪ್ಪಾ! ನನಗೆ ಹುರಿಯಕ್ಕಿ.

ಗುರುವ: ಅಬ್ಬಾ! ನಮ್ಮೆಲ್ಲರ ಹೊಟ್ಟೆಯ ಸಮಸ್ಯೆ ಬಗೆ ಹರಿದಂತಾಯಿತು. ಆ ದೇವದೇವನ ಕೃಪೆಯಿಂದ ನನ್ನ ಸಂಸಾರಕ್ಕೆ ಇನ್ನು ಹಸಿವೆಯ ಭಯವಿಲ್ಲ. ಇನ್ನು ನಾನು ಹೊಟ್ಟೆಪಾಡಿಗಾಗಿ ದುಡಿಯಬೇಕಾಗಿಲ್ಲ. ಕಟ್ಟಿಗೆಯನ್ನು ಕಡಿದು-ಹೊತ್ತು-ಬೇಸತ್ತು-ಬಳಲಿ-ಬೆಂಡಾಗಿ ಹೊಟ್ಟೆಹೊರೆಯಬೇಕಾಗಿಲ್ಲ. ನನ್ನ ಅದೃಷ್ಟವೇ ಅದೃಷ್ಟ. ನಾನು ಕಾಡಿನ ಮಧ್ಯೆ ಸಿಕ್ಕಿಬಿದ್ದುದರಿಂದ ದೇವತೆಗಳ ದರ್ಶನವಾಯಿತು. ನನ್ನ ಬಡತನವು ಹಿಂಗಿತು. ನಾನೇ ಧನ್ಯನು!

ಪದ್ಯ — ("ಮಂದಾರ ಕುಸುಮ"---ಎಂಬಂತೆ).

ಧನ್ಯನು ನಾನೇ । ಮಾನ್ಯನು ನಾನೇ ।<br>
ಧರೆಯೊಳು ಎನ್ನಯ ಸಮಾನರಾರು? ॥<br>
ಧರೆಯೊಳು ಮಾನ್ಯನು ಧನ್ಯನು ನಾನೇ ॥ (ಹೋಗುವನು).

(ತೆರೆ ಬೀಳುವುದು.)

(ತೆರೆಯೇಳುವುದು. ಹೆಂಡದಂಗಡಿ ಕೋಟ್ಯಪ್ಪನು ಹೆಂಡ ಕೊಡುತ್ತಿರುವನು. ತೋಮು, ದೂಮು, ವೆಂಕಪ್ಪನವರು ಕುಡಿಯುತ್ತಿರುವರು.)

ದೂಮು: (ಎದ್ದು ಕೋಟ್ಯಪ್ಪನ ಭುಜ ತಟ್ಟಿ) ಒಂದು — ಒಂದು ಕೊಡಿ—ಒಂದು ದರಂ.

ಕೋಟ್ಯಪ್ಪ: ಕುಳಿತುಕೊಳ್ಳಿ ಸ್ವಾಮಿ— ಕುಳಿತುಕೊಳ್ಳಿ. ಎಲ್ಲರಿಗೂ ಕೊಡುತ್ತೇನೆ.

ತೋಮು: (ದೂಮುನನ್ನು ಕುರಿತು) ದೂಮಣ್ಣಾ, ನಮ್ಮ ಗುರುವ ನನ್ನ ಕಾಣದೆ ಬಹಳ ದಿನವಾಯಿತು. ಅವನು ಯಾವಾಗಲೂ ಹೆಂಡದ

ಅಂಗಡಿಯ ಮುಂದೆ ಹಾಜರಿರುತ್ತಿದ್ದವನು ಈಗ ನಾಲ್ಕಾರು ದಿನಗಳಿಂದಲೂ ಈ ಕಡೆ ಬಾರದಿರಲು ಕಾರಣವೇನು?

ದೂಮು: ಓ! ನಾನವನನ್ನು ನೋಡಲಿಲ್ಲವಲ್ಲ. ಅವನು ಎಲ್ಲಿಗೆ ಹೋಗಿರಬಹುದು? ಬಾ, ನಾವು ಅವನ ಮನೆಗೆ ಹೋಗಿ ಅವನೇಕೆ ಬರಲಿಲ್ಲವೆಂದು ತಿಳಿಯುವಾ. (ವೆಂಕಪ್ಪನು ಒಂದು ಬಾಟಲಿಯನ್ನು ಹಿಡಿದು ಕೊಂಡು ಮುಂದೆ ಬರುವಾಗ ರಸ್ತೆಯ ತೆರೆ ಬೀಳುವುದು.)

ವೆಂಕಪ್ಪ: (ರಸ್ತೆಯಲ್ಲಿ) ಗೇರುಹಣ್ಣಿನ ಅವ್ವಲ್ ಶರಾಬು ಇದು. ಇದರ ಒಂದು ಬಿಂದು ಕುಡಿದರೆ ಸಾಕು! ಎಂಥಾ ಕೆಟ್ಟ ಜ್ವರ—ನೋವಾದರೂ ಬಿಟ್ಟು ಓಡುತ್ತದೆ. (ಬಾಟ್ಲಿಯನ್ನು ತೋರಿಸಿ) ಈ ಒಂದು ಬಾಟ್ಲಿ ಮನೆಯಲ್ಲಿದ್ದರೆ, ಒಂದು ಸಾವಿರ ವೈದ್ಯರು ಮನೆಯಲ್ಲಿದ್ದಂತೆ. ಬೆಳಗ್ಗಿನಿಂದ ಸಂಜೆಯ ವರೆಗೆ ದುಡಿದ ಬಳಲಿಕೆ ಈ ದಿವ್ಯೌಷಧಿಯ ಒಂದೇ—ಒಂದು ತಟಕಿನಿಂದ ಮಾಯ. ಮೈ ಕೈ ನೋವಿಗಿದು ರಾಮಬಾಣ. (ಸ್ವಲ್ಪ ಕುಡಿಯುವನು) ಏನು ರುಚಿ! ಆಹಹಾ!! ರುಚಿಯೋ ರುಚಿ!!! ಒಂದಿಷ್ಟು ಕುಡಿದರೆ ಸಾಕು, ಮೂರು ಲೋಕವೆಲ್ಲವೂ ಕಾಣಿಸುವುದು. (ಕುಡಿದು) ಏನು ರುಚಿ! ಏನು ರುಚಿ!! (ಕುಡಿಯುವನು) ಅಮ್ಮಾ! ಸುರಾದೇವಿಯೇ, ಪ್ರತ್ಯಕ್ಷಳಾಗು! ಅಹಹಾ!! ಸುಖವೇ ಸುಖ!!! ಹೇಗೆ ವರ್ಣಿಸಲಿ ಈ ಅಮೃತದ ರುಚಿಯನ್ನು!

(ಈಚಲ ಮರದಮ್ಮ—ಎಂಬಂತೆ)

ಶೇಂದಿ ಶರಾಬು | ಶೇಂದಿ ಶರಾಬು | ಶೇಂದಿ ಶರಾ-ಬು ||
ಕಾಸು ಕೊಟ್ಟವರಿಗೆ ಕೈಲಾಸ ತೋರ್ಪ ಈ | ಶೇಂದಿ ಶರಾಬು ||
ಆಹಹಾ! ಸುಖವೇ ಸುಖ!! ರುಚಿಯೋ ರುಚಿ!!!

(ಹೋಗುವನು. ತೆರೆ ಏಳುವುದು. ಗುರುವನ ಮನೆ. ದೂಮು-ತೋಮರ ಪ್ರವೇಶ)

ಗುರುವ: ಓಹೋಹೋ! ನೀವೇನು ಒಟ್ಟಿಗೆ ಹೊರಟಿರಿ? ಅಪರೂಪದವರು. ಯಾವ ಕಡೆ ಹೊರಟಿರಿ? ಕೂತುಕೊಳ್ಳಿ.

ದೂಮು: ನಿಮ್ಮನ್ನು ಕಾಣದೆ ಸುಮಾರು ದಿನವಾಯ್ತಣ್ಣ. ನಮ್ಮ ಕೂಟದ ಮನೆಯಲ್ಲಿಯೂ ನಾನು ನಿಮ್ಮನ್ನು ಕಾಣಲಿಲ್ಲ. ನೀವು ಏನು ಕಾರಣ ಆ ಕಡೆ ಬರಲಿಲ್ಲವೆಂದು ತಿಳಿದುಕೊಂಡು ಹೋಗಲು ಬಂದೆವು.

ಗುರುವ: ಹಾಗೆಯೋ?

ತೋಮು: ಹೌದು.

ದೂಮು: ನೀವೇಕೆ ನಮ್ಮ ಕೂಟಕ್ಕೆ ಬರಲಿಲ್ಲ?

ಗುರುವ: ಎಲ್ಲಿಗೆ?

ತೋಮು: ನಮ್ಮ ಶರಾಬಿನ ಹೊಟೆಲಿಗೆ—ಹೆಂಡದ ಭವನಕ್ಕೆ?

ದೂಮು: ನಮ್ಮ ಕೂಟದ ಸ್ನೇಹಿತರೆಲ್ಲ ಒಟ್ಟು ಸೇರುವ ಸ್ಥಳವು ಅದೊಂದೇ ಅಲ್ಲವೇ? ನೀವೇಕೆ ಅಲ್ಲಿ ಬರಲಿಲ್ಲ?

ಗುರುವ: ಬರಲಿಲ್ಲ—ಬರಲಿಕ್ಕಾಗಲಿಲ್ಲ.

ತೋಮು: ಯಾಕೆ?

ಗುರುವ: ಅದೊಂದು ಗುಟ್ಟು. ದೊಡ್ಡ ಗುಟ್ಟು.

ದೂಮು: ಏನು?

ತೋಮು: ಏನದು?

ಗುರುವ: ಆತುರ ಪಡಬೇಡಿ. ನಾನೊಂದು ದಿನ ಕಟ್ಟಿಗೆಗಾಗಿ ಕಾಡಿಗೆ ಹೋಗಿದ್ದೆ. ಎಷ್ಟು ತಿರುಗಿದರೂ ಕಟ್ಟಿಗೆ ಸಿಗಲಿಲ್ಲ (ನಿಲ್ಲಿಸುವನು).

ತೋಮು: ಆ ಮೇಲೆ?

ಗುರುವ: ಕಾಡಿನ ಮಧ್ಯಕ್ಕೆ ಹೋದೆ. ಅಲ್ಲಿ ನನಗೊಂದು ಅಕ್ಷಯ ಪಾತ್ರೆ ಸಿಕ್ಕಿತು.

ದೂಮು: ಅಕ್ಷಯಪಾತ್ರೆ? ಅಕ್ಷಯ-ಪಾತ್ರೆಯೆಂದರೇನು?

ತೋಮು: ಎಲ್ಲಿ ಸಿಕ್ಕಿತು?

ಗುರುವ: ಅಕ್ಷಯಪಾತ್ರೆಯೆಂದರೆ ಒಂದು ಸಾಮಾನ್ಯ ಪಾತ್ರೆ. ಆದರೆ—

ದೂಮು: ಆದರೆ ಏನು?

ಗುರುವ: ಅದು ಕ್ಷಣಮಾತ್ರದಲ್ಲಿ, ಬಯಸಿದ ತಿಂಡಿಯನ್ನು ಕೊಡುವ ಅಸಾಮಾನ್ಯಪಾತ್ರೆ.

ತೋಮ: ಸುಳ್ಳು

ದೂಮ: ಅಂಥ ಪಾತ್ರೆಯೊಂದಿಡೆಯೆಂದರೆ ನಂಬುವ ಮೂರ್ಖರು ನಾವಲ್ಲ.

ಗುರುವ: ನೀವೆ ಈಗ ಅದನ್ನು ಕಣ್ಣಾರೆ ಕಾಣುವಿರಂತೆ. ನಾನು ಅದರಿಂದ ಬೇಕಾದ ತಿಂಡಿಯನ್ನು ತರಿಸಿ ತಿಂದು ಸುಖವಾಗಿದ್ದೇನೆ. ಹಾಳು ಶರಾಬನ್ನು ಬಿಟ್ಟಿದ್ದೇನೆ.

ಮಗು: (ಬಂದು) ಅಪ್ಪಾ! ನನಗೆ ಲಾಡು ಬೇಕು.

ಗುರುವ: ಹೋಗು, ಅಮ್ಮನ ಹತ್ತಿರ ಕೇಳು. ನಿನ್ನ ಅಮ್ಮನ ಹತ್ತಿರ, ಅಕ್ಷಯಪಾತ್ರೆಯನ್ನೊಮ್ಮೆ ಇಲ್ಲಿ ತರಲು ಹೇಳು.

ಮಗು: ಆದೀತು. (ಮಗು ಹೋಗುವುದು. ರುಕ್ಮ ಪಾತ್ರೆ ತಂದುಕೊಡುವಳು.)

ರುಕ್ಮ: ಓಹೋಹೋ! ಅಪರೂಪದವರು. ಯಾವಾಗ ಬಂದಿರಿ!

ಗುರುವ: (ರುಕ್ಮಗೆ) ನೀನು ಒಳಗೆ ಹೋಗು. (ರುಕ್ಮ ಹೋಗುವಳು. ಗುರುವ ಸ್ನೇಹಿತರ ಕಡೆ ತಿರುಗಿ) ಈಗ ನಿಮಗೆ ಯಾವ ತಿಂಡಿಯನ್ನು ತರಿಸಲಿ?

ದೂಮ: ನಿನ್ನ ಮಾತು ಸತ್ಯವಾದರೆ, ಬಿಸಿ ಬಿಸಿ ತುಪ್ಪದೋಸೆ ತರಿಸು.

ತೋಮ: ದೋಸೆ ಬೇಡಯ್ಯಾ, ನಾನು ಮನೆಯಿಂದ ಬರುವಾಗ ಗಂಟಲಿನ ವರೆಗೆ ದೋಸೆ ತಿಂದು ಬಂದೆ. ತಡೆ! ನೆನಪುಮಾಡುತ್ತೇನೆ.

ಗುರುವ: ಯಾವ ತಿಂಡಿ ಬೇಕೋ ಹೇಳಿ.

ದೂಮ: (ತೋಮನನ್ನು ಕುರಿತು) ಇವನ ಮನೆಯಲ್ಲಿ ಚಾ ಮತ್ತು ದೋಸೆ ಇರಬಹುದಾದರೂ ಬಾಳೆಯ ಹಣ್ಣು ಇರಲಾರದು. ನೋಡುವ. ಬಾಳೆಯ ಹಣ್ಣು ತರಿಸಲಿ!

ತೋಮ: ಹೌದು. ಬಾಳೆಯಹಣ್ಣು ತರಿಸು. ನೋಡುವಾ.

ಗುರುವ: (ಅಕ್ಷಯ ಪಾತ್ರೆಗೆ ಕೈಹಾಕಿ ಬೇಡಿ ಹಣ್ಣು ತೆಗೆದು ಇಬ್ಬರಿಗೂ ಕೊಡುವನು.) ತಿನ್ನಿ ನೋಡೋಣ!

ದೂವು: (ಹಣ್ಣನ್ನು ತಿನ್ನುತ್ತಾ) ಎಷ್ಟು ರುಚಿ! ಎಷ್ಟು ರುಚಿಯಾಗಿದೆ!

ತೋವು: ದಿವ್ಯವಾದ ಹಣ್ಣು! ಬಹಳ ರುಚಿಯಾಗಿದೆ!

ಗುರುವ: ದೂವುಣ್ಣಾ! ಈಗ ಗೊತ್ತಾಯಿತೇ, ಅಕ್ಷಯ ಪಾತ್ರೆಯ ಮಹಾತ್ಮೆ?

ತೋವು: ಗುರುವಣ್ಣಾ! ನಮ್ಮಲ್ಲೂ ಅಂಥಾ ಒಂದು ಪಾತ್ರೆ ಇದ್ದರೆ ಚೆನ್ನಾಗಿತ್ತು. ಇದು ಹೇಗೆ ಸಿಕ್ಕಿತು?

ಗುರುವ: ಅದೊಂದು ಗುಟ್ಟು. ಅದನ್ನು ಯಾರೊಡನೆಯೂ ಹೇಳಬಾರದು. ಹೇಳಿದರೆ ಆ ಪಾತ್ರೆಯ ಅಸಾಮಾನ್ಯ ಶಕ್ತಿಯು ನಷ್ಟವಾಗುವುದು.

ತೋವು: ಆಗಲಿ. ಬೇಡ.

ದೂವು: ತೋವುಣ್ಣಾ ನಾವು ಹೋಗುವ.

ತೋವು: ಹೋಗೋಣ. (ಗುರುವನೊಡನೆ) ಗುರುವಣ್ಣಾ, ನಾವು ಹೋಗುತ್ತೇವೆ. ನಮಸ್ಕಾರ.

(ಎದುರಿಗೆ ಬರುವಾಗ ರಸ್ತೆಯ ಘಟನೆ ಜೀಳುವುದು.)

ದೂವು: (ರಸ್ತೆಯಲ್ಲಿ) ಹೌದೋ ತೋವ, ನಮಗೂ ಒಂದು ಅಕ್ಷಯ ಪಾತ್ರೆ ಬೇಕಿತ್ತು.

ತೋವು: ಕಾಡಿಗೆ ಹೋಗುವ. (ಆಲೋಚಿಸಿ) ಹೌದೋ—ಅದು ಎಲ್ಲಿ ಸಿಕ್ಕಿತೂಂತ ಅವನು ಹೇಳಲೇ ಇಲ್ಲವಲ್ಲ.

ದೂವು: ಅದು ಎಲ್ಲಿ ಸಿಕ್ಕಿದರೇನು? ನಮಗಂತೂ ಅಕ್ಷಯ ಪಾತ್ರೆ ಸಿಕ್ಕುವಂತಿಲ್ಲ.

ತೋವು: ಸಿಕ್ಕುವಂತಿಲ್ಲ—ಏನದು? ನಮ್ಮ ಗೆಳೆಯನಿಗೆ ಸಿಕ್ಕಿದೆ.

ದೂವು: ಸಿಕ್ಕಿದ ಪಾತ್ರೆಯ ಸದುಪಯೋಗವಾಗುವ ಹಾಗೆ ಪ್ರಯತ್ನಿಸುವುದೇ ಜಾಣತನ.

ತೋವು: ಅದು ಹೌದು. ಆದರೆ (ಆಲೋಚಿಸಿ) ಹೇಗೆ?

ದೂವು: ಅಯ್ಯೋ ಮಂಕೆ! ಅಷ್ಟೂ ತಿಳಿಯದೆ? ನಾವು ನಮ್ಮ ದುಡಿಮೆಯನ್ನೆಲ್ಲಾ ಕೋಟ್ಯಪ್ಪನಿಗೆ ಕೊಡುತ್ತಿರುವೆವು.

ತೋಮ: ಹೌದು. ಆದರೆ ಇನ್ನು ಆ ತಾಪತ್ರಯವಿಲ್ಲ; ಅಲ್ಲವೇ?

ದೂಮ: ಹೌದು. ನಮ್ಮ ಗೆಳೆಯನ ಮನೆಗೆ ಹೋಗುವುದು.

ತೋಮ: ಕೈ ಜೋಡಿಸಿ ಬೇಡುವುದು.

ದೂಮ: ಸ್ವಾಮಿ, ಹುಳಿ ಹೆಂಡ ಬರಲಿ ಎಂದು.

ತೋಮ: ಹೆಂಡವೇಕೆ? ಶರಾಬು, ಅವ್ವಲ್ ದ್ರಾಕ್ಷಾರಸವನ್ನು ಬೇಡಿ–

ದೂಮ: ಹೊಟ್ಟೆ ತುಂಬಾ ಕುಡಿಯೋಣ— ನಡೆ.

ತೋಮ: ನೆಟ್ಟಗೆ ನಡೆಯುವಾ.

(ಹೋಗುವರು. ಗುರುವನ ಮನೆ. ಗೆಳೆಯರು ಬರುವರು.)

ಗುರುವ: ಏನು ದೂಮಣ್ಣಾ ಬಂದುಬಿಟ್ಟೆ? ಬಾಳೆಹಣ್ಣಿನ ರುಚಿ ಹಿಡಿದಿರೋ?

ದೂಮ: ಹೌದು.

ತೋಮ: ಅಲ್ಲ. ಬಾಳೆಹಣ್ಣು ದಿವ್ಯವಾಗಿತ್ತು. ಅದಕ್ಕಿಂತಲೂ ದಿವ್ಯವಾದುದು ಬೇಕಿತ್ತು.

ಗುರುವ: ಯಾವುದದು?

ತೋಮ: ನೀನೇ ಯೋಚಿಸು ಮೈಗೆ ಬಲವೀವ–ಮನಸ್ಸಿಗೆ ನೆಮ್ಮದಿಯೀವ–

ದೂಮ: ದಿವ್ಯೌಷಧಿ.

ಗುರುವ: ಹಾಗೆಂದರೆ?

ತೋಮ: ಹಾಗೆಂದರೆ—

ದೂಮ: ತಿಳಿಯಲಿಲ್ಲವೇ?

ತೋಮ: ಶ—

ದೂಮ: ರಾ— ಇನ್ನು ಒಂದು ಅಕ್ಷರವಿದೆ. ಯಾವುದೆಂದು ಹೇಳು ನೋಡುವಾ.

ಗುರುವ: ಶರಾಬೇ?

ತೋಮ: ಹೌದು.

ಗುರುವ: ಶರಾಬಿನಿಂದ ಮತಿ ಮರೆಯಾಗುತ್ತದೆ. ಬುದ್ಧಿ ಸ್ವಾಧೀನತೆ ತಪ್ಪುತ್ತದೆ. ಆದ್ದರಿಂದ ನಾನದನ್ನು ಬಿಟ್ಟಿದ್ದೇನೆ. ನಿಮಗೂ ಕೊಡಲಾರೆ. ನಿಮಗೆ ಯಾವುದಾದರೂ ದಿವ್ಯವಾದ ಭಕ್ಷ್ಯಗಳು ಬೇಕಾಗಿದ್ದರೆ ತಿಳಿಸಿ. ಈ ಕ್ಷಣ—ಈ ಕ್ಷಣದಲ್ಲಿ ತರಿಸುವೆನು!

ತೋಮ: ಮೋಸ!

ಗುರುವ: ಮೋಸವೇನು?

ದೂಮ: ಮೋಸವಲ್ಲದೆ ಮತ್ತೇನು? ನಿನ್ನಲ್ಲಿರುವುದು ಸಾಮಾನ್ಯ ಪಾತ್ರೆ. ಅದು ಅಕ್ಷಯಪಾತ್ರೆಯೇ ಹೌದಾಗಿದ್ದರೆ, ಅದರಲ್ಲಿ ಶರಾಬು ತರಿಸು ನೋಡುವಾ.

ತೋಮ: ಅದು ಸರಿ

ಗುರುವ: ಅದನ್ನು ಸಾಮಾನ್ಯ ಪಾತ್ರೆಯೆಂದು ತಿಳಿಯಬೇಡಿ. ನೋಡಿ! ನಿಮ್ಮೆದುರಿಗೇ ಶರಾಬನ್ನು ತರಿಸುತ್ತೇನೆ, ನನ್ನ ಪಾತ್ರೆಯ ಅದ್ಭುತಶಕ್ತಿಯನ್ನು ತೋರಿಸುತ್ತೇನೆ. (ಮಗುವನ್ನು ಕರೆದು) ಮಗೂ, ಆ ಪಾತ್ರೆಯನ್ನಿಲ್ಲಿ ತಾ.

(ಪಾತ್ರೆಯನ್ನು ತರಿಸಿ, ಕೈಮುಗಿದು)

ಅಕ್ಷಯ ಪಾತ್ರೆಯೇ! ನಮ್ಮೆಲ್ಲರಿಗೆ ಬೇಕಾಗುವಷ್ಟು ಶರಾಬು ಬರಲಿ! (ಪಾತ್ರೆಯಿಂದ ಶರಾಬನ್ನು ಬಗ್ಗಿಸಿ) ತೋಮಣ್ಣ, ಕುಡಿಯಿರಿ. ದೂಮಣ್ಣ, ಬೇಕಾದಷ್ಟು ಕುಡಿಯಿರಿ.

ತೋಮ: (ಕುಡಿಯುತ್ತಾ) ಓಹೋ! ಎಷ್ಟು ರುಚಿಯಾಗಿದೆ!

ದೂಮ: (ಕುಡಿದು) ದಿವ್ಯವಾಗಿದೆ. ಇನ್ನಷ್ಟು ತರಿಸು.

ತೋಮ: (ಗುರುವನಿಗೆ) ನೀವೂ ಕುಡಿಯಿರಯ್ಯಾ.

ಗುರುವ: ಇಲ್ಲ. ನಾನು ಕುಡಿಯುವುದನ್ನು ಬಿಟ್ಟಿದ್ದೇನೆ. ನಾನು ಶರಾಬನ್ನು ಕುಡಿದರೆ ನನ್ನ ಅಕ್ಷಯಪಾತ್ರೆಯು ನನಗೆ ದಕ್ಕದು.

ತೋಮ: ಅದೇನು? ನೀನೊಬ್ಬ ಯಾವ ಕಾಲದ ಮಾನವನೋ ಏನೋ!

ದೂಮ: ಕುಡಿಯಯ್ಯಾ. ನಮ್ಮಂಥಾ ಮಿತ್ರರು ಬಳಿಯಲ್ಲಿರುವಾಗ ನಿನಗೇನು ಕಡಿಮೆಯಾಗಿದೆ? ನಾವು ಹುಟ್ಟಿದ್ದೇ ಸುಖ ಪಡೆಯುವುದಕ್ಕಾಗಿ. ಮೂರುಲೋಕದಲ್ಲಿಯೂ ಶ್ರೇಷ್ಠವಾದ ಅಮೃತವನ್ನು ಕುಡಿದು ಸುಖ ಪಡೆಯಬೇಕು. ಸತ್ತ ಮೇಲೆ ಈ ಸುಖವಿದೆಯೇ?

(ಎಲ್ಲರೂ ಕುಡಿಯುವರು. ತೆರೆ ಬೀಳುವುದು.)

(ತೋಮ—ದೂಮರ ಪ್ರವೇಶ.)

ದೂಮ: ದಿವ್ಯವಾದ ಶರಾಯಿಯನ್ನು ಬೇಕಾದಷ್ಟು ಕುಡಿಯದವನು ಮಾನವನೇ?

ತೋಮ: ಹೌದಯ್ಯಾ. ಗುರುವನ ಬಳಿಯಲ್ಲಿದ್ದ ಅಕ್ಷಯಪಾತ್ರೆಯನ್ನು ಹಾರಿಸಿದರೆ ನಮಗೆ ಮೂಗಿನ ವರೆಗೆ ಕುಡಿದು ಯಾವಾಗಲೂ ಸ್ವರ್ಗದಲ್ಲೇ ವಿಹರಿಸಬಹುದು.

ದೂಮ: ಹಾಗೆಲ್ಲ ಹಾರಿಸುವುದೆಂದರೇನು? ಗುರುವನು ಅದನ್ನು ತನ್ನ ಜೀವಕ್ಕಿಂತ ಹೆಚ್ಚಾಗಿ ಕಾಣುತ್ತಾನೆ

ತೋಮ: ನಾವು ಅಲ್ಲಿಗೇ ಹೋಗಿ ಕುಡಿಯೋಣ. ಅಂಗಡಿಗೆ ಹೋಗಲು ಕೈಯ್ಯಲ್ಲಿ ಕಾಸೂ ಇಲ್ಲ.

ದೂಮ: ಅದೇ ಒಳ್ಳೆಯದು. ಹೋಗೋಣ.

(ಕೈಯ್ಯಲ್ಲಿ ಬಾಟ್ಲಿಯನ್ನು ಹಿಡಿದು ವೆಂಕಪ್ಪನ ಪ್ರವೇಶ.)

ವೆಂಕಪ್ಪ: ಓಹೋಹೋ! ದೂರ ಹೊರಟಿರಿ?

ತೋಮ: ಇವನೊಬ್ಬ ಶರಾಬಿನ ಸಿಪಾಯಿ.

ದೂಮ: ಇವನನ್ನೂ ಕರಕೊಂಡು ಹೋಗೋಣ.

ವೆಂಕಪ್ಪ: ಎಲ್ಲಿಗಯ್ಯಾ?

ತೋಮ: ನಮ್ಮ ಕಟ್ಟೆಗೆ ಗುರುವನಿಗೆ ಕಾಡಿನಲ್ಲೊಂದು ಅಕ್ಷಯ ಪಾತ್ರೆ ದೊರಕಿದೆ.

ವೆಂಕಪ್ಪ: ಅದರಲ್ಲೇನು ವಿಶೇಷ?

ದೂಮ: ವಿಶೇಷವೇನು? ಕೇಳಿದ ತಿಂಡಿ-ಪಾನೀಯ ಎಲ್ಲ ಸಿಗುತ್ತದೆ.

ವೆಂಕಪ್ಪ - ಆಹಾ!

ತೋವು: ಹೌದಯ್ಯಾ.

ವೆಂಕಪ್ಪ: ಪಾನೀಯವೆಂದರೆ—

ತೋವು: ಕಾಫಿ—ಚಾ—

ದೂವು: ಶರಾಬು.

ವೆಂಕಪ್ಪ: ಆಂ! ಶರಾಬು? ಶರಾಬು ಸಿಕ್ಕಿದರೆ ನನಗೆ ಬೇರೇನೂ ಬೇಡ; ಹೋಗುವ-ಹೋಗುವ.

(ಹೋಗುವರು. ತೆರೆ ಏಳುವುದು. ಗುರುವನ ಮನೆ ತೋವು, ದೂವು, ವೆಂಕಪ್ಪರ ಪ್ರವೇಶ.)

ಗುರುವ: ಬನ್ನಿ! ಬನ್ನಿ! ವೆಂಕಪ್ಪಣ್ಣ ಎಲ್ಲಿದ್ದರು?

ದೂವು: ಅಕ್ಷಯಪಾತ್ರೆಯ ಅಮೃತದ ರುಚಿಯನ್ನು ಸವಿಯಲಿಕ್ಕಾಗಿ ಅವರನ್ನು ಕರಕೊಂಡು ಬಂದೆವು.

ಗುರುವ: ಒಳ್ಳೇದು (ಅವರನ್ನು ಕುಳ್ಳಿರಿಸಿ, ಮಗುವನ್ನು ಕರೆದು) ಮಗೂ, ಅಕ್ಷಯಪಾತ್ರೆಯನ್ನೊಮ್ಮೆ ತಾ.

ರುಕ್ಕು: (ಪ್ರವೇಶಿಸಿ) ಬರುತ್ತಾ ಬರುತ್ತಾ ರಾಯನ ಕುದುರೆ ಕತ್ತೆಯಾಯಿತಂತೆ. ಹಾಗೆಯೇ, ಬರುತ್ತಾ ಬರುತ್ತಾ ನಿಮ್ಮ ಬುದ್ಧಿ ಯಾಕೆ ಹೀಗಾಯಿತು?

ಗುರುವ: ಹೋಗೇ! ಒಳಗೆ ಹೋಗು. ಗಂಡಸರ ಸಭೆಯಲ್ಲಿ ಹೆಂಗುಸರಿಗೆ ಸ್ಥಾನವಿಲ್ಲ.

ರುಕ್ಕು: ನೀವು ಏನು ಬೇಕಾದರೂ ಮಾಡಿ. ನನಗೇನು?

(ಮಗು ಪಾತ್ರೆಯನ್ನು ತರುವುದು. ಗುರುವನು ಅದರಲ್ಲಿ ಶರಾಬನ್ನು ತರಿಸಿ ವೆಂಕಪ್ಪನಿಗೆ ಕೊಡುವನು.)

ಗುರುವ: ವೆಂಕಪ್ಪಣ್ಣ, ನೀವು ಅತಿಥಿ. ಮೊದಲು ನಿಮ್ಮ ಸೇವೆಯಾಗಲಿ.

(ದೂವು ತೋವುರಿಗೆ ಕೊಡುವನು.)

ವೆಂಕಪ್ಪ: (ಕುಡಿದು) ಆಹಾ! ರುಚಿಯಾಗಿದೆ! ಇನ್ನಷ್ಟು ಹಾಕು.

(ಎಲ್ಲರೂ ಚೆನ್ನಾಗಿ ಕುಡಿಯುವರು.)

ತೋಂವು: ಆಹಾ! ರುಚಿ!! ರುಚಿ!!! ಎಷ್ಟು ರುಚಿಯಾಗಿದೆ!! (ಗಂಟಲು ಸರಿಹಮಾಡಿಕೊಂಡು ಹಾಡುವನು).

("ಎಂದಿಗೆ—ಕಾಂಬೆನೋ ಕಾಂತನಾ"—ಎಂಬಂತೆ)

ಎಂತಹ—ರುಚಿಯಿದೂ—ಪಾನವು ।

ದೂವು: ದೇಹಕ್ಕೆ--ಸೌಖ್ಯವ ತರುವಂಥ—ಪಾ—ನೀಯು ॥

ತೋಂವು: ಎಂತಹ—ರುಚಿಯಿದೂ—ಪಾನವು ।

ದೂವು: ದೇಹಕ್ಕೆ--ಸೌಖ್ಯವ--ತರುವಂಥ--ಪಾ--ನೀಯು ।

ಗುರುವ: (ಮತ್ತನಾಗಿ) ಸಾಕುಮಾಡಿ, ನಿಮ್ಮ ಸಂ-ಗೀ-ತಾ-ನ.

ತೋಂವು: ಎಂತಹ—ರುಚಿಯಿದೂ.................

ಗುರುವ: (ಗಟ್ಟಿಯಾಗಿ) ಸಾಕುಮಾಡಿ, ಸಂ-ಗೀ-ತಾ-ನ.

ನಿಲ್ಲಿಸಿ--ನಿಲ್ಲಿ--ಸಿ--ಸಂಗೀ--ತಾನ. ಕೇಳಿ--ಹೇಳುತ್ತೇನೆ--ಕೇಳಿ--ಪಾತ್ರೆ--ಪಾತ್ರೆ--ಪಾತ್ರೆ.

ತೋಂವು: ಏನೋ ಪಾತ್ರೆ?

ದೂವು: (ಗುರುವನನ್ನು ಹಿಡಿಯಲು ಹೋಗುವನು.)

ಗುರುವ: (ಮಾಲುತ್ತ--ಬೀಳುತ್ತ) ಬಿಡಿ--ಬಿಡಿ--ಪಾತ್ರೆ--ಅಕ್ಷಯ ಪಾತ್ರೆ--ಕಾ--ಕಾಡಿನಲ್ಲಿ--ದೇ--ದೇ--ದೇವತೆ--ಗಳು-- ಕೊಟ್ಟ— ದೇವತೆಗಳು—ಕೊಟ್ಟ—(ಹೋಗಿ ಪಾತ್ರೆಯನ್ನೆತ್ತಿ) ಹಾಡಿ--ಹಾಡಿ--ದೂಪಣ್ಣ--ಹಾಡಿ (ಕುಣಿಯಲು ಪ್ರಾರಂಭಿಸುವನು) ಹಾಡಿ--ತಾಂ--ತೋ--ದಿಗಿಣ--ತೈ(ಪಾತ್ರೆಯನ್ನು ಎತ್ತಿ ಹಾಕುವನು) ಅದು ಒಡೆದು ಪುಡಿ ಪುಡಿಯಾಗುವುದು. ಗುರುವನು ಬೀಳುವನು.)

ರುಕ್ಕು: (ಓಡಿಬಂದು) ಅಯ್ಯೋ! ಹೋಯಿತೇ? ನಮ್ಮ ಅನ್ನವೇ ಹೋಯಿತು. ಎಷ್ಟು ಬುದ್ಧಿವಾದ ಹೇಳಿದರೂ ಕೇಳಲಿಲ್ಲ. ಅಕ್ಷಯ ಪಾತ್ರೆಯು—ಕ್ಷಯಪಾತ್ರೆಯಾಯಿತು. (ಅಳುವಳು. ದೂವು ತೋಂವುರು ಗುರುವನನ್ನು ಎತ್ತಿ ಉಪಚರಿಸುತ್ತಿರುವರು)

ಗುರುವ: (ಎಚ್ಚರಗೊಂಡು) ಏನು? ಏನು ರುಕ್ಕು? ಏಕೆ ಅಳುತ್ತಿ?

ರುಕ್ಕು: ನೋಡಿರಿ! (ಪಾತ್ರೆಯ ಚೂರುಗಳನ್ನು ತೋರಿಸಿ) ಇಲ್ಲಿ ಒಡೆದುಬಿದ್ದಿರುವುದು ಏನು?

ಗುರುವ: ಏನು? (ಒಡೆದ ಚೂರುಗಳನ್ನು ನೋಡಿ, ದೂಮ ತೋಮರೊಡನೆ) ನಾನು ಕುಡಿದು ಮತಿಗೆಟ್ಟು ಪಾತ್ರೆಯನ್ನು ಕಳಕೊಂಡೆನು! ದೇವತೆಗಳು ಅದನ್ನು ಕೊಡುವಾಗ ಅದರ ಕುರಿತು ಯಾವ ವಿಷಯವನ್ನು ಯಾರೊಡನೆಯೂ ಹೇಳಬಾರದೆಂದು ಕಟ್ಟಾಜ್ಞೆ ಇತ್ತಿದ್ದರು. ನಾನು ಕುಡಿದು ಮತ್ತನಾಗಿ ಪಾತ್ರೆಯ ರಹಸ್ಯವನ್ನು ಬಯಲುಗೊಳಿಸಿರಬೇಕು. ದೇವರು ನಾನು ಮಾಡಿದ ತಪ್ಪಿಗೆ ತಕ್ಕ ಶಿಕ್ಷೆಯನ್ನು ವಿಧಿಸಿದನು. ನಮ್ಮ ದುರದೃಷ್ಟಕ್ಕಾಗಿ ಅನ್ಯರನ್ನು ಹಳಿಯಲೇಕೆ? ದೇವರೇ! ಮುಂದಾದರೂ ಸದ್ಬುದ್ಧಿಯನ್ನು ಕರುಣಿಸು.

(ವೆಂಕಪ್ಪ, ತೋಮ, ದೂಮರನ್ನು ಸಮೀಪಕ್ಕೆ ಕರೆದು ನಿಲ್ಲಿಸಿ)

ನೋಡಿ, ಶೇಂದಿ ಶರಾಬನ್ನು ಕುಡಿಯುವುದರಿಂದ ಎಂಥ ಅನರ್ಥವಾಗುವುದು ಎಂಬುದನ್ನು ನೀವು ಕಣ್ಣಾರೆ ಕಂಡಂತಾಯಿತು. ಮುಂದಾದರೂ ನಮಗೆ ಸದ್ಬುದ್ಧಿಯನ್ನು ಕರುಣಿಸೆಂದು ನಾವೆಲ್ಲರೂ ಸೇರಿ ದಯಾಮಯನಾದ ದೇವರನ್ನು ಪ್ರಾರ್ಥಿಸೋಣ!

ತೋಮ, ದೂಮ, ವೆಂಕಪ್ಪ: (ಎಲ್ಲರೂ ಮಂಗಳ ಹಾಡುವರು)

("ಸುರೇಂದ್ರವಂದ್ಯ ವಂದಿತೇ ದೇವಿ ಮಂಗಲಂ" ಎಂಬಂತೆ)

ಬಾಲರಾ । ಹರಸುತಾ । ವಿದ್ಯೆ ಬುದ್ಧಿಯಾ ।
ನೀಡು ದೇವಿ । ಎನುತ ನಾವು । ಬೇಡುತಿರುವೆವು ॥
ಮಂಗಳಂ । ಶುಭಾನ್ವಿತೆ । ಮಂಗಳಂ ಜಯಾನ್ವಿತೆ ।
ಮಂಗಳಂ । ಶ್ರೀವರ । ಶಾರದಾಂಬೆ ॥

(ಆರಂಬೋಡಿ ಬೋರ್ಡು ಶಾಲಾ ವರ್ಧಂತ್ಯುತ್ಸವದ ಸಮಯ ಅಭಿನಯಿಸಲು ಬರೆದುದು.)



Edited, Printed & Published by K. V. Shenoy
at The Prabhat Printers, Ltd., Mangalore.